ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ವಿಶ್ವವಿದ್ಯಾನಿಲಯಗಳಲ್ಲಿ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ರದ್ದುಗೊಳಿಸಿರುವ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ(ಶಿಕ್ಷಕರ ಕ್ಷೇತ್ರ) –

12 (179) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ರಾಜ್ಯದ ಉನ್ನತ ಶಿಕ್ಷಣ ಇಲಾಖೆ ವ್ಯಾಪ್ತಿಯಲ್ಲಿ ಬರುವ ಸಾಂಪ್ರದಾಯಿಕ ಹಾಗೂ ಇತರೆ ವಿಶ್ವವಿದ್ಯಾನಿಲಯಗಳ ಸಂಖ್ಯೆ ಎಷ್ಟು; ಅವು ಯಾವುವು; ಅವುಗಳನ್ನು ಯಾವಾಗ ಸ್ಥಾಪನೆ ಮಾಡಲಾಯಿತು; ಅವುಗಳಲ್ಲಿ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕುಲಪತಿಗಳ, ಕುಲಸಚಿವರುಗಳ ವಿವರ ಒದಗಿಸುವುದು; (ವಿಶ್ವವಿದ್ಯಾಲಯವಾರು ವಿವರವಾದ ಮಾಹಿತಿ ಒದಗಿಸುವುದು)

(ಆ) ಯಾವ ಯಾವ ವಿಶ್ವವಿದ್ಯಾಲಯಗಳಲ್ಲಿ ಯಾವ ಯಾವ ವರ್ಷಗಳಿಂದ ದೂರ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿರುತ್ತದೆ; (ವಿಶ್ವವಿದ್ಯಾಲಯವಾರು ಮಾಹಿತಿ ನೀಡುವುದು)

(ಇ) ಇತ್ತೀಚೆಗೆ ಸರ್ಕಾರವು ದೂರ ಶಿಕ್ಷಣ ಕಾರ್ಯಕ್ರಮವನ್ನು ಮೈಸೂರಿನ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದಲ್ಲಿ ಮಾತ್ರ ಮುಂದುವರೆಸುವಂತೆ ಆದೇಶ ಮಾಡಿ, ಇತರೆ ವಿಶ್ವವಿದ್ಯಾಲಯಗಳಲ್ಲಿ ಈ ಕಾರ್ಯಕ್ರಮಗಳನ್ನು ರದ್ದುಗೊಳಿಸಿರುವುದು ನಿಜವೇ;

(ಈ) ಹಾಗಿದ್ದಲ್ಲಿ, ರಾಜ್ಯದಲ್ಲಿ ಉನ್ನತ ಶಿಕ್ಷಣ ಪಡೆಯಬೇಕೆಂಬ ಹಂಬಲವಿರುವ ದೂರ ಶಿಕ್ಷಣ ವಿದ್ಯಾರ್ಥಿಗಳ ಭವಿಷ್ಯವೇನು;

(ಉ) ಸರ್ಕಾರವು ಯಾವ ಕಾಲಮಿತಿಯೊಳಗೆ ಈ ಆದೇಶವನ್ನು ರದ್ದುಗೊಳಿಸಿ, ಮೊದಲಿನಂತೆಯೇ ಮುಂದುವರೆಸಲು ಕ್ರಮ ಕೈಗೊಳ್ಳುವುದು?